# ಸಾವಿತ್ರಿಬಾಯಿ

## ಪ್ರವರ್ತಕಿಯ ಪಯಣ




Azim Premji University

---

"ವ್ಯಕ್ತಿ ಮತ್ತು ಚಿಂತನೆಗಳು" ಎಂಬ ಶೀರ್ಷಿಕೆಯ ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯ ಈ ಹೆಜ್ಜೆ, ನಮ್ಮ ಜ್ಞಾನವನ್ನು ವಿಸ್ತರಿಸುತ್ತಲೇ ಇರುವ ಸಮಾಜ ಸುಧಾರಕರು, ಕಲಾವಿದರು, ವಿಜ್ಞಾನಿಗಳು, ತತ್ವಜ್ಞಾನಿಗಳು ಮತ್ತು ಶಿಕ್ಷಣತಜ್ಞರ ಕ್ರಿಯೆ, ಬದುಕು ಮತ್ತು ಚಿಂತನೆಗಳನ್ನು ಪರಿಶೋಧಿಸುವ ಪ್ರಯತ್ನವಾಗಿದೆ. ಇಂತಹ ಪ್ರಕ್ರಿಯೆಯ ಮೂಲಕ, ನಮ್ಮ ತತ್ತ್ವ ಮತ್ತು ದೃಷ್ಟಿಗಳಿಗೆ ರೂಪ ಕೊಟ್ಟ ಚಿಂತನೆಗಳನ್ನು ಚರ್ಚಿಸುವ, ಅರ್ಥೈಸಿಕೊಳ್ಳುವ ಮತ್ತು ಅವುಗಳೊಂದಿಗೆ ತೊಡಗಿಸಿಕೊಳ್ಳುವ ವೇದಿಕೆಯೊಂದನ್ನು ಒದಗಿಸಲಾದೀತು ಎಂಬುದು ನಮ್ಮ ಆಶಯ.

ಸಾವಿತ್ರಿಬಾಯಿ ಫುಲೆಯವರ ಜೀವನ ಮತ್ತು ಸಾಧನೆಯೇ ಈ ಚಿತ್ರರೂಪಕವಾಗಿದೆ. ಇವರ ಜೀವನ ಸಮಾಜಸೇವೆಗೆ ಮುಡಿಪು. ದಬ್ಬಾಳಿಕೆಯ ಸಾಮಾಜಿಕ ಕಟ್ಟುಪಾಡುಗಳ ಸವಾಲುಗಳನ್ನು ಶಿಕ್ಷಣ, ಸಮಾನತೆ, ಮತ್ತು ನ್ಯಾಯದ ಅನ್ವೇಷಣೆ ನಡೆಸುವ ಮೂಲಕ ಅಸಾಧಾರಣ ಧೈರ್ಯದಿಂದ ಕಾರ್ಯನಿರ್ವಹಿಸಿದ್ದಾರೆ.



Azim Premji University

ISBN 81-963725-5-8
9 788196 372552



Code : 004470
₹ 125
ಮಕ್ಕಳ ಕಥೆ

**SAVITRIBAI - PRAVARTAKIYA PAYANA** (Kannada)
*Translation of the English Book SAVITRIBAI - JOURNEY OF A TRAILBLAZER*
*Concept & Script by Leah Verghese, Ranjna and Medha Sunder, Azim Premji University*
*Illustrations by Sumon Chitrakar, Patuva Artist, West Bengal*
*Design by Jayshree Nair - Misra, Azim Premji University*
*Translated by Gopalakrishna I., Azim Premji Foundation*

First Edition : 2023 | Pages : 48 | Price : ₹ 125

Paper : 100 gsm Art Paper 19.4 kg (¼ Crown Size)
Cover : 250 gsm Art Card 48.5 Kg (¼ Crown Size)

ಸಾವಿತ್ರಿಬಾಯಿ – ಪ್ರವರ್ತಕಿಯ ಪಯಣ

ಕೃತಿಸ್ವಾಮ್ಯ : ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ
ಕನ್ನಡಾನುವಾದದ ಪ್ರಕಟಣೆ : ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

ಮೊದಲ ಮುದ್ರಣ : 2023

**ಬೆಲೆ : ₹ 125**

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001, ✆080–22161900 / 22161901

ಸಹಯೋಗ
**ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ**
ಸರ್ವೆ # 66, ಬುರುಗುಂಟೆ ಗ್ರಾಮ, ಬಿಕ್ಕನಹಳ್ಳಿ ಮುಖ್ಯ ರಸ್ತೆ, ಸರ್ಜಾಪುರ, ಬೆಂಗಳೂರು –562125

ಮುದ್ರಕರು : ಜೆಮಿನಿ ಟೆಕ್ನೋ ಪ್ರಿಂಟ್ಸ್, ಬೆಂಗಳೂರು – 560 021

**0106236487** **ISBN 978-81-963725-5-2**

Published by **Navakarnataka Publications Private Limited**, Embassy Centre Crescent Road, Bengaluru - 560 001. Email : navakarnataka@gmail.com in collabaration with **Azim Premji University**, Survey # 66, Burugunte Village Bikkanahalli Main Road, Sarjapur, Bengaluru - 562125
Website : www.azimpremjiuniversity.edu.in



# ಸಾವಿತ್ರಿಬಾಯಿ
## ಪ್ರವರ್ತಕಿಯ ಪಯಣ

ಪರಿಕಲ್ಪನೆ ಮತ್ತು ಬರೆಹ
**ಲೇಹ್ ವರ್ಗೀಸ್, ರಂಜನಾ, ಮೇಧಾ ಸುಂದರ್**
ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ

ಚಿತ್ರಗಳು
**ಸುಮನ್ ಚಿತ್ರಕಾರ್,** ಪಟುವಾ ಕಲಾವಿದರು, ಪಶ್ಚಿಮ ಬಂಗಾಳ

ವಿನ್ಯಾಸ
**ಜಯಶ್ರೀ ನಾಯರ್–ಮಿಶ್ರಾ,** ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ

ಕನ್ನಡ ಅನುವಾದ
**ಗೋಪಾಲಕೃಷ್ಣ ಐ,** ಅಜೀಂ ಪ್ರೇಮ್‌ಜಿ ಫೌಂಡೇಷನ್

ನವಕರ್ನಾಟಕ ಪ್ರಕಾಶನ

Azim Premji University

# ಸ್ಮರಣೆ

1. ಮಂಗೇಶ್ ದಾಹಿವಾಲೆ – ಮನುಸ್ಕಿ ಪುಣೆ – ಸಾವಿತ್ರಿಬಾಯಿ ಫುಲೆ ಕುರಿತಾದ ಸಂಪನ್ಮೂಲ ಸಂಗ್ರಹಕ್ಕೆ ಸಹಾಯ ಹಾಗೂ ಬೆಂಬಲ ನೀಡಿರುತ್ತಾರೆ.
2. ಸಿಂಥಿಯಾ ಸ್ಟೀಫನ್, ರಾಜ್ಯ ಯೋಜನಾ ನಿರ್ದೇಶಕರು, ಮಹಿಳಾ ಸಮಖ್ಯ, ಕರ್ನಾಟಕ – ಸಾವಿತ್ರಿಬಾಯಿ ಹಾಗೂ ಅವರ ಸಾಧನೆಗಳ ಐತಿಹಾಸಿಕ ಹಿನ್ನೆಲೆಯ ಬಗೆಗಿನ ಮಹತ್ವಪೂರ್ಣ ಮಾಹಿತಿ ಮತ್ತು ಈ ಕುರಿತ ಹೆಚ್ಚಿನ ಸಂಪನ್ಮೂಲಗಳ ಬಗ್ಗೆ ಅಮೂಲ್ಯವಾದ ಸಲಹೆಗಳನ್ನು ನೀಡಿರುತ್ತಾರೆ.
3. ಅನನ್ಯ ಭಟ್ಟಾಚಾರ್ಯ – ಪಟುವಾ ಕಲಾವಿದರ ಸಂಪರ್ಕ ಹಾಗೂ ಸಂಘಟನೆಗೆ ಸಹಕಾರ ನೀಡಿರುತ್ತಾರೆ.
4. ಭಂಕು ಚಿತ್ರಕಾರ್ – ಆರಂಭಿಕವಾಗಿ ಸಚಿತ್ರಗಳನ್ನು ರಚಿಸಲು ಸಹಾಯ ಮಾಡಿದ್ದಲ್ಲದೆ, ಸುಮನ್ ಚಿತ್ರಕಾರ್‌ಗೆ ಬೆಂಬಲವಾಗಿ ಕಾರ್ಯನಿರ್ವಹಿಸಿರುತ್ತಾರೆ
5. ಕಿಶೋರ್ ಚೌರೆ – ಫುಲೆ ವಂಶಸ್ಥರನ್ನು ಸಂಪರ್ಕಿಸಲು ಸಹಾಯ ಮಾಡಿರುತ್ತಾರೆ.
6. ಸಾವಿತ್ರಿಬಾಯಿ ಫುಲೆ ವಂಶಸ್ಥರು, ಪುಣೆ ಇವರು ತಮ್ಮ ಪೂರ್ವಜರ ಕುರಿತಾದ ಕಥೆಗಳನ್ನು ಹಂಚಿಕೊಂಡಿರುತ್ತಾರೆ.
7. ಸುಶ್ಮಾ ದೇಶಪಾಂಡೆ – ಪುಸ್ತಕದ ವಿಮರ್ಶೆಯನ್ನು ಮಾಡಿ ಮೌಲ್ಯಾಧಾರಿತ ಸೂಕ್ತ ಸಲಹೆಗಳನ್ನು ನೀಡಿರುತ್ತಾರೆ.
8. ನೀಲಾಂಜನ್ ಚೌಧುರಿ – ಈ ಯೋಜನೆಗೆ ಮಾರ್ಗದರ್ಶನ, ಬೆಂಬಲ ಮತ್ತು ಸಲಹೆಗಳನ್ನು ನೀಡಿರುತ್ತಾರೆ.
9. ಎಂ. ಕೆ. ಶಂಕರನಾರಾಯಣ ಭಟ್ಟ – ಕನ್ನಡದ ಕರಡು ಪ್ರತಿಯನ್ನು ನೋಡಿ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ.
10. ಉಮೇಶ್ ಪಾದೆ, ಮುಖ್ಯಸ್ಥರು, ಅಜೀಂ ಪ್ರೇಮ್‌ಜಿ ಫೌಂಡೇಷನ್, ಜಿಲ್ಲಾ ಸಂಸ್ಥೆ, ಮಂಡ್ಯ – ಇವರು ಸೂಕ್ತ ಸಹಕಾರ ಮತ್ತು ಪ್ರೋತ್ಸಾಹ ನೀಡಿರುತ್ತಾರೆ.
11. ಶ್ರೀಧರ ಎ. – ಕನ್ನಡ ವ್ಯಾಕರಣದ ದೋಷಗಳನ್ನು ತಿದ್ದಿ, ಸೂಕ್ತಸಲಹೆ ನೀಡಿರುತ್ತಾರೆ.



# ಪ್ರಸ್ತಾವನೆ

ಇತಿಹಾಸದ ಪುಟಗಳಲ್ಲಿ ಸಾವಿತ್ರಿಬಾಯಿ ಫುಲೆಯವರ ಹೆಸರು ಕಾಣಸಿಗುವುದು ತುಂಬಾ ವಿರಳ. ಇವರು ಸಮಾಜದ ಕೆಲವು ಸಾಂಪ್ರದಾಯಿಕ ಪದ್ಧತಿಗಳನ್ನು ಹೋಗಲಾಡಿಸುವ ಕಾರ್ಯದಲ್ಲಿ ತೊಡಗಿಸಿಕೊಂಡು, ಸಮಾಜ ಸುಧಾರಣೆ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಕಾರಿ ಬದಲಾವಣೆ ತರುವಲ್ಲಿ ಗುರುತರವಾದ ಕೆಲಸ ಮಾಡಿದ್ದಾರೆ. ಈ ನಿಟ್ಟಿನಲ್ಲಿ ಸಾವಿತ್ರಿಬಾಯಿ ಫುಲೆ ವಹಿಸಿದ ಪಾತ್ರ ಸರ್ವಕಾಲದಲ್ಲೂ ಶ್ಲಾಘನೀಯ. ಸಾಮಾಜಿಕ ಬದಲಾವಣೆಯ ಚಿಂತನೆ ಹಾಗೂ ಸಮಾಜವನ್ನು ಬಲಪಡಿಸುವ ಕಾರ್ಯದಲ್ಲಿ ಜ್ಯೋತಿರಾವ್ ಫುಲೆಯವರಷ್ಟೇ ಸಮರ್ಥವಾಗಿ ಕಾರ್ಯ ನಿರ್ವಹಿಸಿದ್ದಾರೆ. ಬಹುತೇಕರು ಅವರ ಪತಿಯನ್ನು ಗುರುತಿಸಿದಷ್ಟು ಎಲೆಮರೆಯ ಕಾಯಿಯಂತೆ ದುಡಿದ ಸಾವಿತ್ರಿಬಾಯಿಯವರನ್ನು ಗುರುತಿಸಲಿಲ್ಲ. ಅವರನ್ನು ಸಾವಿತ್ರಿಬಾಯಿಯಾಗಿಯೇ ಗುರುತಿಸುವ ಮಹತ್ತರವಾದ ಕಾರ್ಯವಾಗಬೇಕಿದೆ. ಸಮಾಜ ಮತ್ತು ಸಾಂಪ್ರದಾಯಿಕವಾದ ಸಾಮಾಜಿಕ ಆಚರಣೆಗಳ ವಿರೋಧದ ನಡುವೆಯೂ ತಮ್ಮ ಜೀವನವನ್ನು ಆಯ್ಕೆಮಾಡಿಕೊಳ್ಳುವ ಧೈರ್ಯ ಹಾಗೂ ಸಂವೇದನೆಗಳೊಂದಿಗೆ ಪ್ರಗತಿಪರ ಆಲೋಚನೆ ಮತ್ತು ಕಾರ್ಯ ಸಾಧನೆಯಲ್ಲಿ ಅವರು ಸ್ವತಃ ತಮ್ಮ ಕಾಲದವರಿಗಿಂತ ಒಂದು ಹೆಜ್ಜೆ ಮುಂದಿದ್ದರು.

ಸಾವಿತ್ರಿಬಾಯಿಯವರು ಫುಲೆಯವರೊಂದಿಗೆ ಸೇರಿ ಸಾಧಿಸಿದ ಗಮನೀಯ ಮತ್ತು ಗಣನೀಯ ಸಾಧನೆಗೆ ರೂಪಕೊಟ್ಟ ಅವರ ಚಿಂತನೆ, ವಿಚಾರಗಳು ಹಾಗೂ ಅವರ ಜೀವನವನ್ನು ಓದುಗರಿಗೆ ಪರಿಚಯಿಸುವ ಒಂದು ಕಿರು ಪ್ರಯತ್ನವೇ ಈ ಚಿತ್ರರೂಪಿಕೆ. 9ನೇ ವಯಸ್ಸಿನಲ್ಲೇ ಮದುವೆಯಾಗಿ, ನಂತರ ಶಿಕ್ಷಣವನ್ನು ಪಡೆದ ಇವರು, ಸ್ವಾತಂತ್ರ್ಯಪೂರ್ವ ಭಾರತದ ಬೆರಳೆಣಿಕೆಯ ಮಹಿಳಾ ಶಿಕ್ಷಕಿಯರಲ್ಲಿ ಓರ್ವರು. ಈ ದಂಪತಿಗಳು ಹೆಣ್ಣು ಮಕ್ಕಳಿಗಾಗಿಯೇ ಶಾಲೆಯನ್ನು ಪ್ರಾರಂಭಿಸಿದರು. ಸಾಮಾನ್ಯವಾಗಿ ಹೆಣ್ಣುಮಕ್ಕಳಿಗಾಗಿಯೇ ಸ್ಥಾಪಿಸಿದ ಮೊದಲ ಶಾಲೆಯೆಂದು ಇದು ಪರಿಗಣಿಸಲ್ಪಟ್ಟಿದೆ. ಈ ಶಾಲೆಯು ಸ್ತ್ರೀ ಸಬಲೀಕರಣ, ಲಿಂಗ ಸಮಾನತೆ, ಯಾವುದೇ ಜಾತಿ, ಧರ್ಮ ತಾರತಮ್ಯವಿಲ್ಲದ ತರಗತಿಗಳಿಂದ ಹಲವರ

ವಿರೋಧಗಳ ನಡುವೆಯೂ ಯಶಸ್ವಿಯಾಗಿ ಕಾರ್ಯನಿರ್ವಹಿಸಿತು. ಸಮಾಜದ ದಿಕ್ಕನ್ನೇ ಬದಲಿಸಿದ ಈ ಮಹತ್ತರ ಕಾರ್ಯವು ನಿರ್ಗತಿಕರಿಗೆ ಮತ್ತು ತುಳಿತಕ್ಕೊಳಗಾದವರಿಗೆ ನಿಸ್ವಾರ್ಥ ಸೇವೆ ಮಾಡಲು ಸಮಾನತೆಯ ದೃಷ್ಟಿಯಿಂದ ಸರ್ವರ ಹಿತಕ್ಕಾಗಿ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಮತ್ತಷ್ಟು ದುಡಿಯಲು ನಾಂದಿ ಹಾಡಿತು.

ನಾವು, ಸಾವಿತ್ರಿಬಾಯಿಯವರ ಜೀವನ ಮೌಲ್ಯಗಳು ಮತ್ತು ಆದರ್ಶಗಳ ಸಿರಿವಂತಿಗೆಯನ್ನು ಪಶ್ಚಿಮ ಬಂಗಾಳದ ಪ್ರಸಿದ್ಧ ಜಾನಪದ ಕಲೆಯಾದ ''ಪಟುವಾ''ದ (ಪಟುವಾ ಎಂಬುವುದು ಚಿತ್ರಗಳ ಮೂಲಕ ದುರ್ಗಾ ಮಾತೆಯ ಕಥೆಯನ್ನು ತಿಳಿಸುವ ಒಂದು ಜಾನಪದ ಕಲೆ) ಮೂಲಕ ಓದುಗರಿಗೆ ಕಟ್ಟಿಕೊಡುವ ಮತ್ತು ಪ್ರೇರೇಪಿಸುವ ಪ್ರಯತ್ನ ಮಾಡಿದ್ದೇವೆ. ಈ ಚಿತ್ರರೂಪಿಕೆಯ ಸುಂದರ ಚಿತ್ರಗಳು ಮಿಡ್ನಾಪುರದ ಪಟುವಾ ಕಲಾವಿದ ಸುಮನ್ ಚಿತ್ರಕಾರ್‌ರವರ ಕುಂಚದಿಂದ ಮೂಡಿ ಬಂದಿವೆ. ಸಾವಿತ್ರಿಬಾಯಿಯವರ ದೂರದೃಷ್ಟಿಯಲ್ಲಿನ ಶಕ್ತಿಯು ಅದಕ್ಕಿಂತ ಕಡಿಮೆಯೇನಲ್ಲವೆಂದೇ ಇವರನ್ನು ಆ ಮಾತೆಗೆ ಸಮಾನಾಂತರವಾಗಿ ಚಿತ್ರಿಸಲು ಈ ಕಲೆಯನ್ನೇ ಬಳಸಿಕೊಳ್ಳಲಾಗಿದೆ. ಚಿತ್ರರೂಪಿಕೆಯನ್ನು ರಚಿಸುವ ಮತ್ತು ಸಾವಿತ್ರಿಬಾಯಿಯವರ ಕುರಿತು ಕಲಿಯುವ ಪ್ರಕ್ರಿಯೆಯು ನಮ್ಮಲ್ಲಿ ಸ್ಫೂರ್ತಿ ತುಂಬಿದೆ. ಒಬ್ಬ ವ್ಯಕ್ತಿಯ ಅಚಲವಾದ ವಿಶ್ವಾಸ ಮತ್ತು ದೃಢವಾದ ಸಂಕಲ್ಪಗಳು ಅನೇಕ ಸಾಮಾಜಿಕ ವರ್ಗಗಳ ವಿರೋಧದ ನಡುವೆಯೂ ಹೇಗೆ ಸಮಾಜವನ್ನು ಬದಲಿಸಬಲ್ಲವು, ಸಂಘಟನೆಗೆ ಹೇಗೆ ಶಕ್ತಿದಾಯಕವಾಗಬಲ್ಲವು, ನಿಸ್ವಾರ್ಥ ಸೇವೆಗೆ ಬರುವ ಸಂಘರ್ಷಗಳನ್ನು ಹೇಗೆ ತೊಡೆದು ಹಾಕಬಲ್ಲವು ಎಂಬುವುದಕ್ಕೆ ಸಾವಿತ್ರಿಬಾಯಿಯವರ ಜೀವನವು ನಮಗೆ ಮಾರ್ಗದರ್ಶನವಾಗಿದೆ. ಈ ವರ್ಣರಂಜಿತ ನಿರೂಪಣೆಯು ನಿಮಗೂ ಪ್ರೇರಣೆ ನೀಡುತ್ತದೆ ಎಂದು ನಾವು ಆಶಿಸುತ್ತೇವೆ.

**ಮೇಧಾಸುಂದರ್**

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ, ಬೆಂಗಳೂರು



## 19ನೇ ಶತಮಾನದಲ್ಲಿ ಮಹಾರಾಷ್ಟ್ರ

19ನೇ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ಎರಡನೇ ಪೇಶ್ವೆ ಬಾಜಿರಾವ್ ಇವರ ಆಳ್ವಿಕೆಯು ಅಸಮರ್ಪಕತೆ ಮತ್ತು ದುಂದುವೆಚ್ಚದಿಂದ ಕೂಡಿತ್ತು. ಓರ್ವ ಪೇಶ್ವೆಯಾಗಿ, ಇವರ ಆಳ್ವಿಕೆ ಭಯಾನಕವಾದದ್ದು. ಇವರು ಸಾಮಂತ ರಾಜರನ್ನು ಅವಮಾನ ಮಾಡುವುದು, ಅವರ ಆಸ್ತಿಪಾಸ್ತಿಗಳನ್ನು ಬಲವಂತವಾಗಿ ವಶಪಡಿಸಿಕೊಳ್ಳುವುದು ಮಾತ್ರವಲ್ಲದೆ ಆತ ಸ್ತ್ರೀಲೋಲುಪನಾಗಿದ್ದನು

ಸಾಮಾಜಿಕ ಕಟ್ಟುಪಾಡುಗಳು ಸಂಕುಚಿತ ಹಾಗೂ ಸಾಂಪ್ರದಾಯಿಕವಾಗಿದ್ದವು. ಜಾತಿ ವ್ಯವಸ್ಥೆ ಅತ್ಯಂತ ಕಟ್ಟುನಿಟ್ಟಾಗಿತ್ತು. ಕೆಳಜಾತಿಗಳಾದ ಮಹರ್, ಮಾಂಗ, ಚಂಬಾರ, ಭಂಗಿ, ದೇಡ್ ಜನರು ಮೇಲ್ಜಾತಿಯವರು ನಡೆಯುವ ದಾರಿಯಲ್ಲಿ ಹಾದುಹೋಗುವಂತಿರಲಿಲ್ಲ.

ಮಹಾರಾಷ್ಟ್ರ ಪ್ರಾಂತ್ಯದಲ್ಲಿರುವ ಒಟ್ಟು ಜನಸಂಖ್ಯೆಯ ಶೇಕಡಾ 5ಕ್ಕಿಂತ ಕಡಿಮೆ ಇರುವ ಬ್ರಾಹ್ಮಣ ಸಮುದಾಯದವರು ವ್ಯವಹಾರಕ್ಕೆ ಆವಶ್ಯಕವಾದ ಪಾಶ್ಚಿಮಾತ್ಯ ಶಿಕ್ಷಣ ಪಡೆದು, ಸರ್ಕಾರಿ ಸೇವೆಯಲ್ಲಿ ಭಾರತೀಯರಿಗೆ ಸೀಮಿತ ಅವಕಾಶವಿದ್ದಾಗಲೂ, ಹುದ್ದೆಗಳನ್ನು ಗಿಟ್ಟಿಸಿಕೊಂಡಿದ್ದರು.


ಪೇಶ್ವೆ ಬಾಜಿರಾವ್


ಬೇಗನೆ ಕುಳಿತುಕೊಳ್ಳಿ.
ನಮ್ಮ ನೆರಳೂ ಬ್ರಾಹ್ಮಣರ
ದೇಹದ ಮೇಲೆ
ಬೀಳಬಾರದು.

ಬ್ರಿಟಿಷರು ಜಾತಿ ವ್ಯವಸ್ಥೆಯನ್ನು ಟೀಕಿಸುತ್ತಿದ್ದರೂ, ಅವರು ಯಾವುದೇ ಗುರುತರವಾದ ಕ್ರಮ ಕೈಗೊಳ್ಳಲು ಬಯಸುತ್ತಿರಲಿಲ್ಲ. ವಿಶೇಷವಾಗಿ 1857ರ ಕ್ರಾಂತಿಯ ನಂತರ ಭಾರತದಲ್ಲಿ ಆಡಳಿತ ಮುಂದುವರಿಕೆಯ ಸಂದಿಗ್ಧತೆಯನ್ನು ಬ್ರಿಟಿಷ್ ಸರ್ಕಾರ ಎದುರಿಸುತ್ತಿತ್ತು.

19ನೇ ಶತಮಾನದ ಮಧ್ಯ ಭಾಗದಲ್ಲಿ ಬದಲಾವಣೆಯ ಮೋಡಗಳು ದಿಗಂತದಲ್ಲಿ ಕಾಣಿಸತೊಡಗಿದ್ದವು. ಪಾಶ್ಚಿಮಾತ್ಯ ಶಿಕ್ಷಣ ಪಸರಿಸಲಾರಂಭಿಸಿತ್ತು. ಭಾರತೀಯ ವಿದ್ಯಾರ್ಥಿಗಳಿಗೆ ದಾರ್ಶನಿಕ ಚಳುವಳಿಯ ಆಲೋಚನೆಗಳು, ತಾರ್ಕಿಕತೆಯ ಪ್ರಾಮುಖ್ಯತೆ, ಮಾನವನ ಸ್ವಾಯತ್ತತೆ, ಸಮಾನತೆ ಮತ್ತು ಜಾತ್ಯತೀತತೆಯಂತಹ ಹೊಸ ಪರಿಕಲ್ಪನೆಗಳ ಪರಿಚಯವಾಗತೊಡಗಿತ್ತು.

ಕೈಗಾರಿಕೆ, ರೈಲುಯಾನ ಹಾಗೂ ಸಂವಹನದ ಪ್ರಗತಿಯು ನಗರಗಳ ಅಭಿವೃದ್ಧಿಗೆ ದಾರಿಮಾಡಿಕೊಟ್ಟಿತು.

ನಗರ ಪ್ರದೇಶಗಳ ಜನರು ಹಳ್ಳಿಯ ಜನರಿಗಿಂತ ಹೆಚ್ಚು ದ್ವಂದ್ವಗಳನ್ನು ನಿವಾರಿಸಿಕೊಂಡು ಸಾರ್ವಜನಿಕ ಜೀವನದಲ್ಲಿ ಹೊಸ ಪ್ರಜ್ಞೆಯನ್ನು ಪಡೆದುಕೊಳ್ಳಲಾರಂಭಿಸಿದರು.







1882ರಲ್ಲಿ ಬ್ರಿಟಿಷ್ ರಾಜ್ಯ ಕಾರ್ಯದರ್ಶಿ, ಗ್ಲಾಡ್‌ಸ್ಟೋನ್‌ಗೆ, ಗವರ್ನರ್ ಜನರಲ್‌ರಾದ ರಿಪ್ಪನ್ ಹೀಗೆ ಬರೆಯುತ್ತಾರೆ:

"ಭಾರತದಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದೆ. ಆದರೆ ಅದನ್ನು ಯಾರೂ ಗಮನಿಸುತ್ತಿಲ್ಲ. ಅಧುನಿಕವಾದಿಗಳು ಕೂಡಾ ಬದಲಾವಣೆಯ ಹಾದಿಗೆ ಪ್ರವೇಶಿಸಿರುವುದನ್ನೂ ಅನುಮಾನಿಸುತ್ತಾರೆ. ಶಿಕ್ಷಣದ ಪ್ರಚಾರ, ಹೆಚ್ಚುತ್ತಿರುವ ಮುಕ್ತ ಮಾಧ್ಯಮಗಳ ಪ್ರಭಾವ, ವಿವೇಚನಾ ಆಡಳಿತದ ಬದಲಾಗಿ ಕಾನೂನು ಬಳಕೆ, ರೈಲ್ವೆ ಮತ್ತು ಟೆಲಿಗ್ರಾಫ್ ಪ್ರಗತಿಯು ಯುರೋಪ್ ಖಂಡದೊಂದಿಗೆ ಸಂವಹನ ಸುಲಭ ಸಾಧ್ಯವಾಗಿಸಿದೆ. ಇದು ಜನರಲ್ಲಿ ಗುರುತರವಾದ ಪರಿಣಾಮವನ್ನುಂಟುಮಾಡಿದೆ. ಹೊಸ ವಿಚಾರಗಳು ಪುಟಿದೇಳುತ್ತಿವೆ. ಹೊಸ ಆಕಾಂಕ್ಷೆಗಳು ಗರಿಗೆದರುತ್ತಿವೆ. ಸಾರ್ವಜನಿಕ ಅಭಿಪ್ರಾಯದ ಶಕ್ತಿಯು ಬೆಳೆಯುತ್ತಿದ್ದು ದಿನದಿಂದ ದಿನಕ್ಕೆ ಬಲಗೊಳ್ಳುತ್ತಿದೆ. ಇದಲ್ಲದೆ ಯುರೋಪಿನ ಹಲವು ವಿಚಾರಗಳ ಒಳಹರಿವಿಗೆ ತೆರೆದುಕೊಂಡಿದ್ದು, ಬದಲಾವಣೆಯ ಗಾಳಿ ಬೀಸುತ್ತಿರುವುದು ಸಂಶಯಾತೀತ. ಇದು ಚಳುವಳಿಯಾಗಿ ಪ್ರಾರಂಭಗೊಂಡು, ಕ್ಷಿಪ್ರವಾಗಿ ಬೆಳೆದು ವರ್ಷದಿಂದ ವರ್ಷಕ್ಕೆ ಪ್ರಬಲಗೊಳ್ಳುತ್ತಿದೆ."



ಭಾರತ ಉಪಖಂಡದಲ್ಲಿ ರಾಜಾರಾಮ ಮೋಹನರಾಯ, ಈಶ್ವರಚಂದ್ರ ವಿದ್ಯಾಸಾಗರ ಮತ್ತು ದಯಾನಂದ ಸರಸ್ವತಿ ನೇತೃತ್ವದಲ್ಲಿ ನಡೆದ ಸಾಮಾಜಿಕ ಸುಧಾರಣಾ ಚಳವಳಿಯಿಂದ ಮಹಾರಾಷ್ಟ್ರದ ಜನತೆ ಪ್ರೇರಿತರಾದರು.



ಸಾವಿತ್ರಿಬಾಯಿ ಫುಲೆ ಈ ಕಾಲಘಟ್ಟದಲ್ಲಿ ಹುಟ್ಟಿದರು, ಬೆಳೆದರು ಮತ್ತು ಕಾರ್ಯನಿರ್ವಹಿಸಿದರು. ಅವರ ಜೀವನ ಕಥೆ ಪ್ರಾರಂಭವು ಸತಾರ ಜಿಲ್ಲೆಯ ನೈಗಾಂವ್ ಎಂಬ ಸಣ್ಣ ಹಳ್ಳಿಯಲ್ಲಿ ಜನವರಿ 3, 1831ರಂದು ಖಂಡೂಜೀ ನ್ಯೂವಾಸೆಯ ಮನೆಯಲ್ಲಿ ಹುಟ್ಟಿದರು.






ಮಗುವಿಗೆ ಸಾವಿತ್ರಿ ಎಂದು ನಾಮಕರಣ ಮಾಡಲಾಯಿತು.




ಸಾವಿತ್ರಿ ತಿಳಿದುಕೊಳ್ಳಬೇಕೆಂಬ ಆಸಕ್ತಿಯುಳ್ಳ ಮಗು,
ಹೊಸ ವಿಷಯಗಳನ್ನು ತಿಳಿಯಲು ಉತ್ಸಾಹಿಯಾಗಿದ್ದಳು.
ನೀವು ಏನು ಮಾಡುತ್ತಿದ್ದೀರಿ?
ದೂರ ಹೋಗಿ ಆಟವಾಡು. ನನಗೆ ಅಡುಗೆ ಕೆಲಸವಿದೆ.
ಯಾಕೆ ಒಲೆಯನ್ನು ಊದುತ್ತಿರುವೆ?
ಬೆಂಕಿ ಉರಿಯುವುದಕ್ಕೆ ಇದು ಆವಶ್ಯಕ.
ನಾನು ಅದನ್ನೇ ಮಾಡಬಯಸುವೆ!
ಇಲ್ಲೇ ಅದನ್ನು ಮಾಡು. ನಂತರ ಅಡುಗೆಮನೆಯಿಂದ ಹೋಗು.
ಸಾವಿತ್ರಿ ಒಲೆ ಊದಿದಾಗ,
ಬೂದಿಯೆಲ್ಲಾ ಹಾರಿ ಮುಖವನ್ನು ಆವರಿಸಿತು.
ಅವಳು ಅಡುಗೆಮನೆಯಿಂದ ಓಡಿಹೋದಳು.
ಇದು ಅವಳ ತಾಯಿಗೆ ವಿನೋದವನ್ನುಂಟುಮಾಡಿತು.


ಸಾವಿತ್ರಿ ಅತ್ಯಂತ ಧೈರ್ಯಶಾಲಿಯಾಗಿದ್ದಳು.
ಗೋವಿಂದ ಅಳುತ್ತಿರುವುದು ಯಾಕೆ?
ಮರದ ಮೇಲೆ ಹಾವು ಇದೆ! ಗೋವಿಂದ ಕೆಳಗೆ ಬರಲು ಸಾಧ್ಯವಿಲ್ಲ!
ತಕ್ಷಣವೇ ಸಾವಿತ್ರಿ ಮರ ಏರಿದಳು. ಹಾವನ್ನು ಎತ್ತಿಕೊಂಡು ಇನ್ನೊಂದು ಕೊಂಬೆಗೆ ಎಸೆದಳು. ಬದುಕಿದೆಯೋ ಬಡಜೀವ ಎಂದು ಗೋವಿಂದ ನಿರಾಳಗೊಂಡು, ಅಳುವುದನ್ನು ನಿಲ್ಲಿಸಿ, ಮರದಿಂದ ಕೆಳಗಿಳಿದನು.
ಇಸವಿ 1840. ಸಾವಿತ್ರಿಗೆ 9 ವರ್ಷ ವಯಸ್ಸಾಗಿತ್ತು.
ಅವನ ಹೆಸರೇನು?
ನಾನು ಸಾವಿತ್ರಿಗೆ ವರನನ್ನು ಹುಡುಕಿದ್ದೇನೆ. ಅವರು ಗೋವಿಂದರಾವ್‌ರವರ ಮಗ. ಮಾಲಿ ಜಾತಿಗೆ ಸೇರಿದವನು.
ಜ್ಯೋತಿರಾವ್




ಮದುವೆ ಸಮಯದಲ್ಲಿ ಜ್ಯೋತಿರಾವ್‌ಗೆ 13 ಹಾಗೂ ಸಾವಿತ್ರಿಗೆ 9 ವರ್ಷವಾಗಿತ್ತು.


ವಿವಾಹದ ನಂತರ ಸಾವಿತ್ರಿಬಾಯಿ ಪುಣೆಗೆ ಬಂದು ವಾಸ್ತವ್ಯ ಹೂಡಿದರು.




ಅವರ ಪತಿ ಜ್ಯೋತಿರಾವ್ ಮಿಷನರಿ ಶಾಲೆಯಲ್ಲಿ ಶಿಕ್ಷಣ ಪಡೆದಿದ್ದರು. ಇವರು ವಿದ್ಯಾಭ್ಯಾಸ ಪೂರ್ಣಗೊಳಿಸುವಲ್ಲಿ ಅವರ ಸೋದರ ಸಂಬಂಧಿ, ವಿಧವೆ ಸುಗುಣಬಾಯಿಯವರು ಬಹುದೊಡ್ಡ ಪಾತ್ರವಹಿಸಿದ್ದರು.
ನಿನ್ನ ಮಗನನ್ನು ಶಾಲೆಗೆ ಕಳುಹಿಸಲೇಬೇಕು. ನನ್ನ ಮಾಲೀಕರಾದ ಶ್ರೀ ಜಾನ್‌ರವರು ಸಹಾಯ ಮಾಡುವ ಭರವಸೆ ನೀಡಿದ್ದಾರೆ.
ಆಗಬಹುದು, ನಾನು ಪ್ರಯತ್ನಿಸುವೆ.


ಜ್ಯೋತಿರಾವ್‌ರವರು ಥಾಮಸ್ ಪೈನೆರವರ ವಿಚಾರಧಾರೆಯಿಂದ ಮಹತ್ತರವಾಗಿ ಪ್ರಭಾವಿತರಾದರು.
ಅವರು ಮಹಿಳೆಯರಿಗೆ ಶಿಕ್ಷಣದ ಅವಕಾಶಗಳ ಕೊರತೆಯ ವಿರುದ್ಧ ಹೋರಾಡಿದ್ದರು.
"ನಾನು ಮನುಷ್ಯರ ನಡುವೆ ಸಮಾನತೆ ತತ್ವದಲ್ಲಿ ನಂಬಿಕೆಯುಳ್ಳವನು... ನನ್ನ ಸಹವರ್ತಿಗಳನ್ನು ಸಹಾ ಸಂತೋಷವಾಗಿಡಲು ಪ್ರಯತ್ನಿಸುವೆ... ವಿಶ್ವವೇ ನನ್ನ ದೇಶ, ಮನುಕುಲದ ಎಲ್ಲರೂ ನನ್ನ ಸಹೋದರರು ಹಾಗೂ ನನ್ನ ಧರ್ಮಕ್ಕೆ ಒಳಿತನ್ನು ಮಾಡುವೆ......"
ಬಾಲಕಿಯರಿಗಾಗಿ ಶಾಲೆಗಳೇ ಇಲ್ಲದಿರುವುದನ್ನು ನಾನು ಗಮನಿಸಿದ್ದೇನೆ. ಎಂತಹಾ ವಿಪರ್ಯಾಸ! ಮಹಿಳೆಯರ ಸ್ಥಿತಿ ಸುಧಾರಣೆಯಾಗದೆ ದೇಶವು ಪ್ರಗತಿ ಸಾಧಿಸಲು ಸಾಧ್ಯವಿಲ್ಲ. ನಾವು ಬಾಲಕಿಯರಿಗಾಗಿಯೇ ಶಾಲೆ ಪ್ರಾರಂಭಿಸಬೇಕು.
ಜ್ಯೋತಿರಾವ್ ತನ್ನ ಪತ್ನಿಗೆ ಶಿಕ್ಷಣ ನೀಡಲು ಪ್ರಾರಂಭಿಸಿದರು.




ಶಿಕ್ಷಕರ ತರಬೇತಿ ಸಂಸ್ಥೆ
ಸಾವಿತ್ರಿ ಬಾಯಿ ನಂತರ ಅಹಮದ್ ನಗರದಲ್ಲಿರುವ ಶ್ರೀಮತಿ ಫರಾರ್‌ರವರ ಸಂಸ್ಥೆಗೆ ಹೋದರು ಮತ್ತು ನಾರಮಾನ್ ಶಾಲೆಯಲ್ಲಿ ಶಿಕ್ಷಕಿಯಾಗಿ ತರಬೇತಿ ಪಡೆದುಕೊಂಡರು.


ಹೆಣ್ಣು ಮಕ್ಕಳಿಗಾಗಿ ಶಾಲೆ
1848ರಲ್ಲಿ ಜ್ಯೋತಿರಾವ್ ಮತ್ತು ಸಾವಿತ್ರಿಬಾಯಿ ಫುಲೆಯವರು ಪುಣೆಯ ಭಿಡೆವಾಡದಲ್ಲಿ ಬಾಲಕಿಯರಿಗಾಗಿ ಶಾಲೆಯನ್ನು ಪ್ರಾರಂಭಿಸಿದರು. ಸಾವಿತ್ರಿಯವರು ಈ ಶಾಲೆಯಲ್ಲಿ ಶಿಕ್ಷಕಿಯಾಗಿ ವೃತ್ತಿ ಬದುಕನ್ನು ಪ್ರಾರಂಭಿಸಿದರು ಮತ್ತು ಶಾಲೆಯ ಮುಖ್ಯ ಶಿಕ್ಷಕಿಯಾಗಿ ಕಾರ್ಯನಿರ್ವಹಿಸಿದರು.




ಉಸ್ಮಾನ್ ಶೇಕ್ ಎಂಬ ಕಾರ್ಯಕರ್ತನ ಸಹೋದರಿ ಫಾತಿಮಾ ಶೇಕ್ ನಮ್ಮ ಶಾಲೆಯಲ್ಲಿ ಬೋಧಿಸಲು ಸ್ವ-ಇಚ್ಛೆಯಿಂದ ಮುಂದೆ ಬಂದಿದ್ದಾಳೆ. ಇಲ್ಲಿ ಬೇರೆ ಬೇರೆ ಜಾತಿಯ ಮಕ್ಕಳು ಒಟ್ಟಿಗೆ ಅಧ್ಯಯನ ಮಾಡುತ್ತಾರೆ.
ನಾನು ಬ್ರಾಹ್ಮಣ. ನಾನು ಮುಕ್ತಾ ಜೊತೆಗೆ ಕುಳಿತುಕೊಳ್ಳಲು ಸಾಧ್ಯವಿಲ್ಲ. ಅವಳು ಮಹಾರ್!
ಈ ಶಾಲೆಯಲ್ಲಿ ಎಲ್ಲರೂ ಸಮಾನರು. ಮುಕ್ತಾ ಸಹಾ ನಿನ್ನಂತೆಯೇ ಓರ್ವ ಮನುಷ್ಯಳು. ನೀನು ಅವಳ ಜೊತೆ ಕುಳಿತುಕೊಳ್ಳಲು ನಿರಾಕರಿಸಲು ಸಾಧ್ಯವಿಲ್ಲ.


ಆ ಕಾಲಘಟ್ಟದಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದೇ ಅತಿಶಯದ ಕಲ್ಪನೆಯಾಗಿತ್ತು. ಫುಲೆಯವರ ಈ ಪ್ರಯತ್ನವನ್ನು ಅನೇಕರು ವಿರೋಧಿಸಿದರು. ಸಾವಿತ್ರಿಬಾಯಿ ಪ್ರತಿದಿನ ಶಾಲೆಗೆ ಹೋಗುವಾಗ, ಪುರುಷರು ಕಲ್ಲು ಮತ್ತು ಸಗಣಿಯನ್ನು ಎಸೆಯುತ್ತಿದ್ದರು.
ದೇವರು ನಿಮ್ಮನ್ನು ಕ್ಷಮಿಸಲಿ. ನಾನು ನನ್ನ ಕರ್ತವ್ಯವನ್ನು ಮಾಡುತ್ತಿದ್ದೇನೆ. ಆ ದೇವರು ನಿಮಗೆ ಒಳ್ಳೆಯದನ್ನೇ ಮಾಡಲಿ!
ಇದೋ ಹೊಸ ಸೀರೆ. ಪ್ರತಿದಿನ ಶಾಲೆಗೆ ತಲುಪುವಷ್ಟರಲ್ಲಿ ನಿನ್ನ ಸೀರೆ ಕೊಳೆಯಾಗಿರುತ್ತದೆ. ಯಾಕೆಂದರೆ ಪ್ರತಿಯೊಬ್ಬರು ಹೊಲಸನ್ನು ಬಿಸಾಕುತ್ತಾರೆ. ನಿನ್ನ ಜೊತೆ ಈ ಸೀರೆಯನ್ನು ತೆಗೆದುಕೊಂಡು ಹೋಗು. ಶಾಲೆಯಲ್ಲಿ ತರಗತಿ ಪ್ರಾರಂಭಿಸುವ ಮೊದಲು ನೀನು ಸೀರೆಯನ್ನು ಬದಲಾಯಿಸಬಹುದು.




ಅದೊಂದು ದಿನ, ಸಾವಿತ್ರಿಬಾಯಿ ಶಾಲೆಗೆ ಹೋಗುವ ದಾರಿಯಲ್ಲಿ ಧಡೂತಿ ಮನುಷ್ಯನೊಬ್ಬ ನಿಂತಿದ್ದನು.
ನೀನು ಮಾಡುತ್ತಿರುವುದು ತಪ್ಪು ಎಂದು ನಿನಗೆ ತಿಳಿದಿರಲಿ. ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡತಕ್ಕದ್ದಲ್ಲ. ಅವರು ಮನೆಯ ಉಸ್ತುವಾರಿ ವಹಿಸಬೇಕು.
ದಯವಿಟ್ಟು ನನಗೆ ದಾರಿ ಬಿಡು. ನನ್ನನ್ನು ನನ್ನ ಪಾಡಿಗೆ ಹೋಗಲು ಅವಕಾಶ ಕೊಡು.
ಇಲ್ಲ. ನಾನು ಹೋಗುವುದಿಲ್ಲ. ನಮ್ಮ ಸಂಸ್ಕೃತಿ ಮತ್ತು ಧರ್ಮದ ವಿರುದ್ಧ ಕೆಲಸ ಮಾಡುವ ನಿನ್ನನ್ನು ಶಾಲೆಗೆ ಹೋಗಲು ಬಿಡುವುದಿಲ್ಲ. **ಮನೆಗೆ ಹೋಗು!**
ಹೀಗೆ ಮಾತನಾಡಲು ಎಷ್ಟು ಧೈರ್ಯ ನಿನಗೆ? ನೀನು ಕೇವಲ ಒಂದು ಹೆಣ್ಣು.
ನಾನು ಮನೆಗೆ ಹೋಗುವುದಿಲ್ಲ!
ಸಾವಿತ್ರಿಬಾಯಿ ನಿಂತ ಜಾಗದಿಂದ ಕದಲಲೇ ಇಲ್ಲ. ತಾನು ಏನು ಮಾಡುತ್ತೇನೆ ಎಂದು ನಂಬಿದ್ದಳೋ ಅದನ್ನು ಮಾಡಲು ಸಾಮಾನ್ಯ ಬೆದರಿಕೆ ಮತ್ತು ವಿರೋಧವನ್ನು ಲೆಕ್ಕಿಸಲೇ ಇಲ್ಲ.









**ಶಾಲಾ ಸಮಿತಿ ವರದಿ**

ಸಮಿತಿಯವರು ಶಾಲೆಯ ಹಣಕಾಸು ಸ್ಥಿತಿಗತಿಗೆ ತಕ್ಕಂತೆ ಶಿಕ್ಷಕರನ್ನು ಕಡಿಮೆ ಸಂಬಳಕ್ಕೆ ನೇಮಕಾತಿ ಮಾಡಬೇಕಾದ ಅನಿವಾರ್ಯತೆ ಬಂದೊದಗಿದೆ. ಅವರಿಗೆ ಉತ್ತಮ ಸಂಬಳದ ಕೆಲಸ ಸಿಕ್ಕಿದಾಗ, ಈ ಕೆಲಸವನ್ನು ಬಿಟ್ಟುಬಿಡುತ್ತಾರೆ. ಶಾಲೆಯ ಮುಖ್ಯ ಶಿಕ್ಷಕಿ ಸಾವಿತ್ರಿಬಾಯಿಯವರು ಔದಾರ್ಯದಿಂದ ಸ್ವಯಂಸೇವಕಿಯಾಗಿ ಹೆಣ್ಣು ಮಕ್ಕಳ ಶಿಕ್ಷಣದ ಸುಧಾರಣೆಗಾಗಿ ಸಂಭಾವನೆ ಇಲ್ಲದೆ ತಮ್ಮನ್ನು ತಾವೇ ತೊಡಗಿಸಿಕೊಂಡಿದ್ದಾರೆ. ಜ್ಞಾನದ ಪ್ರಗತಿಯ ಮೂಲಕ ಈ ದೇಶದ ಜನರು ಹೆಣ್ಣು ಮಕ್ಕಳಿಗೆ ಶಿಕ್ಷಣದ ಅನುಕೂಲತೆಯ ಬಗ್ಗೆ ಜಾಗೃತಗೊಳ್ಳುವರು ಎಂಬ ಭರವಸೆ ನಮ್ಮದು. ಹೆಣ್ಣುಮಕ್ಕಳ ಸ್ಥಿತಿ ಸುಧಾರಿಸಲು ಎಲ್ಲಾ ಲೆಕ್ಕಾಚಾರದ ಯೋಜನೆಗಳು ಸೌಜನ್ಯಯುತವಾಗಿ ಸಹಕರಿಸುತ್ತವೆ.

## 'ಪೂನಾ ಅಬ್ಸರ್ವರ್'ನ ವರದಿ – ಮೇ 29, 1852

"ಜ್ಯೋತಿರಾವ್‌ರವರು ನಡೆಸುವ ಶಾಲೆಯಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಸರ್ಕಾರಿ ಶಾಲೆಯಲ್ಲಿ ಕಲಿಯುವ ಹುಡುಗರಿಗಿಂತ ಹತ್ತು ಪಟ್ಟು ಹೆಚ್ಚಾಗಿತ್ತು. ಈ ಶಾಲೆಯ ವ್ಯವಸ್ಥೆ ಸರ್ಕಾರಿ ಶಾಲೆಯ ಕಲಿಕಾ ವ್ಯವಸ್ಥೆಗಿಂತ ಬಹಳ ಶ್ರೇಷ್ಠ ಮಟ್ಟದಲ್ಲಿದ್ದುದೇ ಇದಕ್ಕೆ ಕಾರಣ. ಇದೇ ಪರಿಸ್ಥಿತಿ ಮುಂದುವರಿದಲ್ಲಿ, ಸರ್ಕಾರಿ ಶಾಲೆಯ ಗಂಡು ಮಕ್ಕಳಿಗಿಂತ ಜ್ಯೋತಿರಾವ್ ಶಾಲೆಯ ಹೆಣ್ಣು ಮಕ್ಕಳೇ ಉನ್ನತ ಮಟ್ಟದವರು ಎಂದು ಸಾಬೀತಾಗುತ್ತದೆ. ಅದಲ್ಲದೇ ಮುಂಬರುವ ಪರೀಕ್ಷೆಗಳಲ್ಲಿ ಅವರು ನಿಜವಾಗಿಯೂ ದೊಡ್ಡ ವಿಜಯ ಸಾಧಿಸಬಹುದು. ಸರ್ಕಾರಿ ಶಿಕ್ಷಣ ಮಂಡಳಿಯು ಶೀಘ್ರವಾಗಿ ಕ್ರಮಕೈಗೊಳ್ಳದಿದ್ದಲ್ಲಿ ಮಹಿಳೆಯರು ಪುರುಷರನ್ನು ಮೀರಿಸಿ, ಮಹಿಳೆಯರ ಮುಂದೆ ಪುರುಷರು ತಲೆ ತಗ್ಗಿಸಬೇಕಾದೀತು."

('ಪೂನಾ ಅಬ್ಸರ್ವರ್' ಒಂದು ದಿನಪತ್ರಿಕೆ)









ಅವರು ಪುಣೆಯ ಹೊರಗಡೆ ವಾಸಿಸುತ್ತಿರುವ ಮಕ್ಕಳಿಗೆ
ವಸತಿ ನಿಲಯವನ್ನು ಸ್ಥಾಪಿಸಿದರು.
ಇಲ್ಲಿ ವಾಸವಿದ್ದ ವಿದ್ಯಾರ್ಥಿನಿ ಲಕ್ಷ್ಮಣ್ ಕರಡಿ ಜಯಾ ತನ್ನ ನೆನಪುಗಳನ್ನು ಈ ರೀತಿ ವಿವರಿಸುತ್ತಾಳೆ. "ದಯೆ ಹಾಗೂ ಪ್ರೀತಿಯಿಂದ ಕೂಡಿದ ಸಾವಿತ್ರಿಬಾಯಿಯಂತಹ ಮಹಿಳೆಯನ್ನು ನಾನು ಜೀವನದಲ್ಲಿಯೇ ನೋಡಿಲ್ಲ. ಒಬ್ಬ ತಾಯಿ ನೀಡಿದ ಪ್ರೀತಿಗಿಂತಲೂ ಒಂದು ಬೊಗಸೆ ಹೆಚ್ಚು ಪ್ರೀತಿ ಅವರು ನೀಡಿದ್ದಾರೆ."
ಮತ್ತೊಬ್ಬ ವಿದ್ಯಾರ್ಥಿನಿಯಾದ ಮಹಾದು ಸಹಾದು ವಾಘಹೋಲೆ ಈ ರೀತಿ ಬರೆಯುತ್ತಾರೆ: "ಸಾವಿತ್ರಿಬಾಯಿ ಅವರು ಬಹಳ ಉದಾರಿಗಳು ಮತ್ತು ದಯಾಮಯಿಗಳು. ಅವರು ಬಡವರು ಮತ್ತು ನಿರ್ಗತಿಕರಿಗೆ ಅತ್ಯಂತ ಸಹಾನುಭೂತಿ ಉಳ್ಳವರು. ಅವರು ಅನ್ನ ದಾಸೋಹವನ್ನು ಉಡುಗೊರೆಯಾಗಿ ನೀಡಿದ್ದಾರೆ. ಹರಿದ ಬಟ್ಟೆಯ ಬಡಮಹಿಳೆಯರನ್ನು ನೋಡಿದರೆ ಇವರು ತನ್ನ ಮನೆಯಿಂದ ಸೀರೆಯನ್ನು ನೀಡುತ್ತಿದ್ದರು."
ಇದರಿಂದಾಗಿ ಅವರ ಖರ್ಚು ವೆಚ್ಚಗಳು ಹೆಚ್ಚಾದವು.
ನಾವು ತುಂಬಾ ಹೆಚ್ಚು ವ್ಯಯಿಸಬಾರದು.
ನಾವು ಸಾಯುವ ಸಂದರ್ಭ ದಲ್ಲಿ ನಮ್ಮೊಂದಿಗೆ ತೆಗೆದು ಕೊಂಡು ಹೋಗುತ್ತೇವೆಯೇ?




ಶಿಕ್ಷಣ ಕ್ಷೇತ್ರವನ್ನು ಮೀರಿ ತಮ್ಮ ಕಾರ್ಯಕ್ಷೇತ್ರ ವಿಸ್ತರಿಸಿದರು.
ಇಂದು ನಾನು ಬಹಳ ಮನಕಲುಕುವ ಘಟನೆಯನ್ನು ಕೇಳಿದೆ. ನನ್ನ ಸ್ನೇಹಿತ ಗೋವಂಡೆಯ ಮನೆಯಲ್ಲಿ ಕೆಲಸ ಮಾಡುವ ಕಾಶಿಬಾಯಿ ಎಂಬ ಮಹಿಳೆ ನಿಮಗೆ ನೆನಪಿದೆಯೇ?
ಹೌದು. ಮಹಿಳೆ ತುಂಬು ಯೌವನೆ ಹಾಗೂ ಸುಂದರಿ.
ಹೌದು. ಕುತಂತ್ರಿ ಶಾಸ್ತ್ರಿಯೊಬ್ಬನು ಅವಳನ್ನು ಗರ್ಭಿಣಿಯನ್ನಾಗಿಸಿ, ತದನಂತರ ಅವಳ ಹಾಗೂ ಮಗುವಿನ ಜವಾಬ್ದಾರಿ ಹೊರಲು ನಿರಾಕರಿಸಿದ್ದಾನೆ. ಅವಳು ಅಸಹಾಯಕಳು ಹಾಗೂ ತನ್ನ ಹೊಟ್ಟೆಯಲ್ಲಿರುವ ಮಗುವನ್ನು ಗರ್ಭದಲ್ಲೇ ಸಾಯಿಸಿದಳು. ಪೊಲೀಸರು ಇವಳನ್ನು ಬಂಧಿಸಿದ್ದಾರೆ.
ಇದು ವಿಧವೆಯಾದ ಮಹಿಳೆಯನ್ನು ಸಮಾಜ ಹೇಗೆ ಕಾಣುವುದೆಂದು ತಿಳಿಸುತ್ತದೆ.
ಕಾಶಿಬಾಯಿಗೆ ಜೀವಾವಧಿ ಶಿಕ್ಷೆ ವಿಧಿಸಿ ಕಾಲಾಪಾನಿ (ಅಂಡಮಾನಿನಲ್ಲಿರುವ ಜೈಲಿನ ಹೆಸರು) ಜೈಲಿಗೆ ಕಳುಹಿಸಿದ್ದಾರೆ. ಇದು ಫುಲೆಯವರಿಗೆ ಗರ್ಭಿಣಿ ವಿಧವೆಯರಿಗೆ ಆಶ್ರಯ ನೀಡಲು ಪ್ರೇರೇಪಿಸಿತು ಹಾಗೂ ತಮ್ಮ ಮನೆಯಲ್ಲಿ ಅವರಿಗಾಗಿ ಆಶ್ರಯಧಾಮವನ್ನು ಪ್ರಾರಂಭಿಸಿದರು. ಅದುವೇ.....
ಶೋಷಿತ ವಿಧವೆಯರ ಆಶ್ರಯಧಾಮ
395, ಗಂಜ್ ಪೇಟ್ ಪುಣೆ


ಸಾವಿತ್ರಿಬಾಯಿ ಗರ್ಭಿಣಿ ವಿಧವೆಯರ ಆರೈಕೆ ಹಾಗೂ ಅವರ ಹೆರಿಗೆಗೆ ಸಹಾಯ ಮಾಡುತ್ತಿದ್ದರು.
ಅದೊಂದು ದಿನ. ಜ್ಯೋತಿರಾವ್ ಮನೆಗೆ ಬರುವ ಸಂದರ್ಭದಲ್ಲಿ ಓರ್ವ ಮಹಿಳೆ ಆತ್ಮಹತ್ಯೆಗೆ ಪ್ರಯತ್ನಿಸುತ್ತಿದ್ದುದನ್ನು ಗಮನಿಸಿದರು.
ನಿಲ್ಲು! ನೀನು ಈ ರೀತಿ ಏಕೆ ಮಾಡುತ್ತಿರುವೆ?
ನಿಮಗಿದು ಅರ್ಥವಾಗಲ್ಲ ಬಿಡಿ!
ಏನು ತಪ್ಪು ಆಗಿದೆಯೆಂದು ನೀನು ಹೇಳಲೇ ಬೇಕು. ಬಹುಶಃ ನಾನು ಸಹಾಯ ಮಾಡಬಹುದು.
ನಾನು ಗರ್ಭಿಣಿ. ನನ್ನನ್ನು ಮತ್ತು ನನ್ನ ಮಗುವನ್ನು ಈ ಸಮಾಜ ಬಹಿಷ್ಕರಿಸುತ್ತದೆ. ಅದಕ್ಕಿಂತಲೂ ನಾನು ನನ್ನ ಹುಟ್ಟಲಿರುವ ಮಗುವಿನೊಂದಿಗೆ ಸಾಯುವುದೇ ಲೇಸು.




ನಾನು ಮತ್ತು ನನ್ನ ಪತ್ನಿ ಸೇರಿ ನಿಮ್ಮಂತಹ ಮಹಿಳೆಯರಿಗಾಗಿ ಆಶ್ರಯಧಾಮವನ್ನು ಸ್ಥಾಪಿಸಿದ್ದೇವೆ. ನನ್ನೊಂದಿಗೆ ಬಾ. ನೀನು ಅಲ್ಲಿ ಇರಬಹುದು ಹಾಗೂ ಮಗುವಿಗೆ ಜನ್ಮ ನೀಡಬಹುದು. ನಿನಗೆ ಯಾರೊಬ್ಬರೂ ತೊಂದರೆ ಮಾಡಲಾರರು.
ಜ್ಯೋತಿರಾವ್ ಮತ್ತು ಸಾವಿತ್ರಿಬಾಯಿ ಆ ವಿಧವೆಯ ಮಗುವನ್ನು ದತ್ತು ತೆಗೆದುಕೊಂಡರು ಹಾಗೂ ಯಶ್ವಂತ್ ಎಂದು ನಾಮಕರಣ ಮಾಡಿದರು.
ತಲೆಬೋಳಿಸುವ ಕ್ರಮ ವಿಧವೆಯರನ್ನು ಅವಮಾನ ಗೊಳಿಸುವ ಹಲವು ಕ್ರಮಗಳಲ್ಲಿ ಒಂದು. ಇದನ್ನು ವಿರೋಧಿಸಿ ಕ್ಷೌರಿಕರು ನಡೆಸುತ್ತಿದ್ದ ಮುಷ್ಕರಕ್ಕೆ ಸಾವಿತ್ರಿಬಾಯಿ ಬೆಂಬಲಕ್ಕೆ ನಿಂತರು.
ಇಂದು ಈ ನಾಪಿತರಿಗೆ/ ಕ್ಷೌರಿಕರಿಗೆ ಏನಾಗಿದೆ? ಏಕೆ ಯಾರೊಬ್ಬರೂ ವಿಧವೆಯ ಕೂದಲನ್ನು ಕತ್ತರಿಸುತ್ತಿಲ್ಲ?
ಇಂದು ನಾವು ಮುಷ್ಕರ ಮಾಡುತ್ತಿದ್ದೇವೆ. ಈ ಅನಾಗರಿಕ ಪದ್ಧತಿಯನ್ನು ತೀವ್ರವಾಗಿ ವಿರೋಧಿಸುತ್ತೇವೆ ಹಾಗೂ ಈ ಕೆಲಸವನ್ನು ಮಾಡಲು ಖಂಡಿತವಾಗಿ ನಿರಾಕರಿಸುತ್ತೇವೆ.


ನಾವು ಶಾಲೆಯಿಂದ ಹೊರಗುಳಿಯುವ ಹಾಗೂ ಶಿಕ್ಷಣವನ್ನು ಮೊಟಕುಗೊಳಿಸುವ ಮಕ್ಕಳನ್ನು ತಡೆಯುವುದಕ್ಕಾಗಿ ಏನಾದರೂ ಮಾಡಲೇಬೇಕು. ನಾವು ಪಾಠಗಳನ್ನು ಹೆಚ್ಚು ಆಸಕ್ತಿದಾಯಕವಾಗಿ ಹಾಗೂ ಮಗುವನ್ನು ಅದರಲ್ಲಿ ತೊಡಗಿಸಿಕೊಳ್ಳುವಂತೆ ಮಾಡಲು ಪ್ರಯತ್ನಿಸಬೇಕು ಎಂದು ನನಗನಿಸುತ್ತದೆ.
ಬಹುಶಃ ಶಾಲೆಗೆ ಬರುವ ವಿದ್ಯಾರ್ಥಿಗಳಿಗೆ ಶಿಷ್ಯವೇತನದಂತಹ ಕೆಲವು ಪ್ರೋತ್ಸಾಹಕಗಳನ್ನು ನೀಡಬಹುದು.
ಇದಕ್ಕೆ ಸಂಬಂಧಿಸಿದ ಸಮಸ್ಯೆಯೆಂದರೆ ಪೋಷಕರು ಅನಕ್ಷರಸ್ಥರು. ಅವರಿಗೆ ಶಿಕ್ಷಣದ ಮಹತ್ವದ ಅರಿವು ಇರುವುದಿಲ್ಲ. ನಾವು ವಯಸ್ಕರ ಶಿಕ್ಷಣ ತರಗತಿ ಪ್ರಾರಂಭಿಸುವ ಬಗ್ಗೆಯೂ ಆಲೋಚಿಸಬೇಕು.




ವಯಸ್ಕರ ಶಿಕ್ಷಣ ಕೇಂದ್ರ
ಫುಲೆಯವರು ತಮ್ಮ ಮನೆಯಲ್ಲಿಯೇ ವಯಸ್ಕರ ಶಿಕ್ಷಣ ಕೇಂದ್ರವನ್ನು ಪ್ರಾರಂಭಿಸಿದರು.


1868ರಲ್ಲಿ ನೈಗಾಂವ್ ಗ್ರಾಮದಲ್ಲಿ ಸಾವಿತ್ರಿಬಾಯಿ ಅನಾರೋಗ್ಯದಿಂದ ಚೇತರಿಸಿಕೊಳ್ಳುತ್ತಿದ್ದಳು.
ನಿಮಗೆ ಬ್ರಾಹ್ಮಣರ ಹುಡುಗ ಗಣೇಶ್ ಗೊತ್ತೇ?
ನನಗೆ ಗೊತ್ತಿಲ್ಲ. ಏಕೆ? ಏನಾಗಿದೆ?
ಅವನು ಶಾರಜಳನ್ನು ಪ್ರೀತಿಸುತ್ತಿದ್ದಾನೆ. ಅವಳು ಮಹಾರ್ ಹುಡುಗಿ. ಈಗ ಅವಳು ಆರು ತಿಂಗಳ ಗರ್ಭಿಣಿ. ಇವರ ಸಂಬಂಧ ಊರಿನ ಗ್ರಾಮಸ್ಥರಿಗೆ ತಿಳಿದಿದೆ. ಈ ಜೋಡಿಯನ್ನು ಗ್ರಾಮದಲ್ಲೆಲ್ಲಾ ಮೆರವಣಿಗೆ ಮಾಡಿದ್ದಾರೆ ಹಾಗೂ ಸಮುದಾಯ ಇವರನ್ನು ಕೊಲ್ಲುವುದಾಗಿ ಬೆದರಿಕೆ ಹಾಕಿದೆ.
ಇದನ್ನು ತಡೆಯಲು ನಾನು ಏನಾದರೂ ಮಾಡಲೇಬೇಕು.
ಈ ವಿಷಯದಲ್ಲಿ ನೀನೇಕೆ ತೊಡಗಿಸಿಕೊಳ್ಳಲು ಬಯಸುತ್ತಿ? ಸುಮ್ಮನೆ ಕುಳಿತುಕೋ. ನಿನಗೇಕೆ ಇಲ್ಲದ ಉಸಾಬರಿ. ಇದು ನಮಗೆ ಸಂಬಂಧಪಟ್ಟ ವಿಚಾರವಲ್ಲ.
ಸಮಾಜದಲ್ಲಿ ಆಗುವ ಅನ್ಯಾಯಗಳು ನನಗೆ ಸಂಬಂಧಿಸಿದ್ದೆ. ಇದು ನಿನಗೂ ಸಂಬಂಧಪಟ್ಟ ವಿಚಾರ. ನೀನು ಮತ್ತು ನಾನು ಮೂಕ ಪ್ರೇಕ್ಷಕನಂತೆ ಉಳಿದರೆ, ಸಮಾಜ ಎಂದಿಗೂ ಬದಲಾಗುವುದಿಲ್ಲ.




ಆಕೆ ಹೇಳಿದ್ದು ಸರಿ. ಬಹುಶಃ ನಾವು ಇವರನ್ನು ಬೇರೆ ರೀತಿಯಲ್ಲಿ ಶಿಕ್ಷೆಗೆ ಗುರಿಪಡಿಸಬೇಕು.
ಈ ಮೋಸಮಾಡುವ ಬ್ರಾಹ್ಮಣ ಮತ್ತು ಕೆಳವರ್ಗದ ಹುಡುಗಿಯನ್ನು ಗ್ರಾಮದಿಂದ ಹೊರಹಾಕಬೇಕು.
ನೀವು ಈ ಇಬ್ಬರನ್ನೂ ಕೊಲ್ಲಲು ಸಾಧ್ಯವಿಲ್ಲ. ಬ್ರಿಟಿಷ್ ಕಾನೂನು ಎಷ್ಟು ಕಠಿಣ ಎಂದು ನಿಮಗೆ ಗೊತ್ತು. ಈ ಕೊಲೆಗೆ ನೀವೆಲ್ಲರೂ ಜೈಲು ಪಾಲಾಗುತ್ತೀರಿ.
ನಾವು ಅದಕ್ಕೂ ತಯಾರಿದ್ದೇವೆ.
ನಿಮಗೆ ತುಂಬಾ ಧನ್ಯವಾದಗಳು. ನೀವು ನಮ್ಮ ಜೀವವನ್ನು ಉಳಿಸಿದಿರಿ.
ನನಗೆ ಧನ್ಯವಾದಗಳ ಆವಶ್ಯಕತೆಯಿಲ್ಲ. ನಾನು ನನ್ನ ಕರ್ತವ್ಯವನ್ನು ಮಾಡಿದ್ದೇನೆ. ಈಗ ನೀವು ಈ ಗ್ರಾಮವನ್ನು ಬಿಡಲೇಬೇಕು. ದಯವಿಟ್ಟು ಪುಣೆಗೆ ಹೋಗಿ ಹಾಗೂ ನನ್ನ ಪತಿಯನ್ನು ಭೇಟಿ ಮಾಡಿ. ಅವರು ನಿಮಗೆ ಉದ್ಯೋಗ ಹುಡುಕಲು ಸಹಾಯ ಮಾಡುತ್ತಾರೆ.



1873ರಲ್ಲಿ ಜ್ಯೋತಿರಾವ್ 'ಸತ್ಯಶೋಧಕ ಸಮಾಜ'ವನ್ನು ಸ್ಥಾಪಿಸಿದರು. ಕೆಳ ವರ್ಗದ ಜನರನ್ನು ಬ್ರಾಹ್ಮಣ ಧರ್ಮಗ್ರಂಥಗಳ ಪ್ರಭಾವದಿಂದ ಬಿಡಿಸಿಕೊಳ್ಳುವುದು. ಅವರ ಮಾನವ ಹಕ್ಕುಗಳು ಮತ್ತು ಮಾನಸಿಕ ಹಾಗೂ ಧಾರ್ಮಿಕ ಗುಲಾಮಗಿರಿಯಿಂದ ಸ್ವತಂತ್ರಗೊಳಿಸುವುದನ್ನು ಕಲಿಸುವುದು ಈ ಸಂಸ್ಥೆಯ ಮುಖ್ಯ ಉದ್ದೇಶ. "ಎಲ್ಲರೂ ದೇವರ ಮಕ್ಕಳು. ದೇವರ ಪೂಜೆ ಮಾಡಲು ಮಧ್ಯವರ್ತಿ ಅಥವಾ ಪುರೋಹಿತರ ಆವಶ್ಯಕತೆ ಇಲ್ಲ." ಸಾವಿತ್ರಿಬಾಯಿ ಈ ಸಂಸ್ಥೆಯ ಸಕ್ರಿಯ ಸದಸ್ಯೆ. ಇವರು ಸತ್ಯಶೋಧಕ ಮದುವೆ ಪದ್ಧತಿಯನ್ನು ಪ್ರಾರಂಭಿಸಿದರು. ಮದುವೆಗಳನ್ನು ಯಾವುದೇ ಬ್ರಾಹ್ಮಣ ಪುರೋಹಿತರಿಲ್ಲದೆ ನಡೆಸಲಾಯಿತು. ಈ ಮದುವೆಯಲ್ಲಿ ವರನು ಮಹಿಳೆಯರಿಗೆ ಶಿಕ್ಷಣ ಮತ್ತು ಸಮಾನ ಹಕ್ಕುಗಳನ್ನು ನೀಡುವೆವು ಎಂದು ಪ್ರತಿಜ್ಞೆ ತೆಗೆದುಕೊಳ್ಳುವನು. ಸಾಮಾನ್ಯವಾಗಿ ಮದುವೆಯನ್ನು ಬ್ರಾಹ್ಮಣರು ಪಠಿಸುವ ಮಂತ್ರಗಳನ್ನು ವಧೂವರರಿಂದ ಹಾಡಿಸುವ ಮೂಲಕ ನಡೆಸಲಾಗುತ್ತಿತ್ತು.






1877ರಲ್ಲಿ ಮಹಾರಾಷ್ಟ್ರದಲ್ಲಿ ತೀವ್ರ ಬರಗಾಲ ಮತ್ತು ಆಹಾರದ ಕೊರತೆ ತಲೆದೋರಿತು. ಜ್ಯೋತಿರಾವ್‌ಗೆ ಕ್ಷಾಮದ ಕುರಿತಾಗಿ ಸಾವಿತ್ರಿಬಾಯಿ ಪತ್ರವನ್ನು ಬರೆದರು.



ಏಪ್ರಿಲ್ 20, 1877
ಒತೂರ್, ಜುನ್ನಾರ್

ಸತ್ಯದ ಸಾಕಾರಮೂರ್ತಿ,
ನನ್ನ ದೈವವಾದ ಜ್ಯೋತಿಬಾ,
ಸಾವಿತ್ರಿ ನಿಮಗೆ ವಂದಿಸುತ್ತಾಳೆ !

1876 ವರ್ಷ ಮುಗಿಯಿತು. ಆದರೆ ಬರಗಾಲ ಮುಗಿದಿಲ್ಲ. ಇದು ಅತ್ಯಂತ ಹೆಚ್ಚಿನ ಮಟ್ಟದಲ್ಲಿ ಭಯಾನಕ ರೂಪದಲ್ಲಿ ಉಳಿದುಕೊಂಡಿದೆ. ಜನರು ಸಾಯುತ್ತಿದ್ದಾರೆ. ಪ್ರಾಣಿಗಳು ಸಾಯುತ್ತಿವೆ. ಜನರು ಮತ್ತು ಪ್ರಾಣಿಗಳು ಸತ್ತು ನೆಲದ ಮೇಲೆ ಉರುಳುತ್ತಿವೆ. ತೀವ್ರವಾದ ಆಹಾರ ಹಾಗೂ ಮೇವಿನ ಕೊರತೆಯಿದೆ. ಜನರು ಬಲವಂತವಾಗಿ ಹಳ್ಳಿಯನ್ನು ತೊರೆಯುತ್ತಿದ್ದಾರೆ. ಕೆಲವರು ತಮ್ಮ ಮಕ್ಕಳನ್ನು, ಹದಿಹರೆಯದ ಹುಡುಗಿಯರನ್ನು ಮಾರಾಟ ಮಾಡುತ್ತಿದ್ದಾರೆ ಹಾಗೂ ಗ್ರಾಮ ಬಿಟ್ಟು ಹೋಗುತ್ತಿದ್ದಾರೆ. ನದಿಗಳು, ಸರೋವರಗಳು, ಕೆರೆ ಕುಂಟೆಗಳು ಸಂಪೂರ್ಣವಾಗಿ ಬತ್ತಿ ಹೋಗಿವೆ. ಇಲ್ಲಿ ಕುಡಿಯಲು ನೀರೇ ಇಲ್ಲ. ಮರಗಳು ಸಾಯುತ್ತಿವೆ ಹಾಗೂ ಎಲೆಗಳೆಲ್ಲಾ ಉದುರಿಹೋಗಿವೆ. ಬರಡು ಭೂಮಿ ಎಲ್ಲಾ ಕಡೆ ಬಿರುಕು ಬಿಟ್ಟಿದೆ. ಸೂರ್ಯನ ಬಿಸಿಲಿನ ಧಗೆಯಿಂದ ಗುಳ್ಳೆಗಳು ಏಳುತ್ತಿವೆ. ಜನರು ಆಹಾರ ಮತ್ತು ನೀರಿಗಾಗಿ ತಹತಹಿಸುತ್ತಾ ರೋದಿಸುತ್ತಾ ನೆಲದ ಮೇಲೆ ಬಿದ್ದು ಪ್ರಾಣ ಬಿಡುತ್ತಿದ್ದಾರೆ. ಕೆಲವರು ವಿಷಪೂರಿತ ಹಣ್ಣುಗಳನ್ನು ತಿನ್ನುತ್ತಿದ್ದಾರೆ. ಅಲ್ಲದೆ ತಮ್ಮ ಮೂತ್ರವನ್ನು ಕುಡಿದು ಬಾಯಾರಿಕೆ ನೀಗಿಸುತ್ತಾರೆ. ಅವರೆಲ್ಲಾ ಆಹಾರ ಮತ್ತು ನೀರಿಗಾಗಿ ಅಳಲು ತೋಡಿಕೊಳ್ಳುತ್ತಾ ಇಹಲೋಕ ತ್ಯಜಿಸುತ್ತಿದ್ದಾರೆ.

ನಮ್ಮ ಸತ್ಯಶೋಧಕ ಸಮಾಜದ ಕಾರ್ಯಕರ್ತರ ಸಮಿತಿಯನ್ನು ರಚಿಸಿದ್ದೇವೆ. ಈ ಸಮಿತಿಯು ಆಹಾರ ಹಾಗೂ ಜೀವನಾವಶ್ಯಕ ಸಾಮಗ್ರಿಗಳನ್ನು ಆವಶ್ಯಕ ಜನರಿಗೆ ನೀಡುತ್ತೇವೆ. ಇದಲ್ಲದೆ ಪರಿಹಾರ ತಂಡಗಳನ್ನು ರೂಪಿಸಿದ್ದೇವೆ.

ಸೋದರ ಕೊಂಡಾಜ್ ಮತ್ತು ಅವರ ಪತ್ನಿ ಉಮಾಬಾಯಿ ನನ್ನನ್ನು ಚೆನ್ನಾಗಿ ಆರೈಕೆ ಮಾಡುತ್ತಿದ್ದಾರೆ. ಒತೂರಿನ ಶಾಸ್ತ್ರಿಗಳು, ಗಣಪತಿ ಸಖಾರಾಮ್, ದುಂಬಾರೆ ಪಾಟೀಲ ಮತ್ತು ಇತರರು ನಿಮ್ಮ ಭೇಟಿ ಮಾಡಲು ಯೋಜನೆ ಹಾಕಿಕೊಂಡಿದ್ದಾರೆ. ನೀವು ಸತಾರದಿಂದ

ಆರ್. ಬಿ. ಕೃಷ್ಣಾಜಿ ಪಂತ್ ಮತ್ತು ಲಕ್ಷ್ಮಣ್ ಶಾಸ್ತ್ರಿ ನಿಮಗೆ ನೆನಪಿರಬಹುದು. ಅವರು ಬರಪೀಡಿತ ಪ್ರದೇಶಕ್ಕೆ ನನ್ನೊಂದಿಗೆ ಪ್ರಯಾಣ ಮಾಡುತ್ತಾರೆ. ಸಂತಸ್ತ್ರರಿಗೆ ಸ್ವಲ್ಪ ಪ್ರಮಾಣದ ಹಣಕಾಸು ನೆರವು ನೀಡಿದ್ದಾರೆ.

ಲೇವಾದೇವಿಗಾರರು ಪರಿಸ್ಥಿತಿಯ ದುರ್ಬಳಕೆ ಮಾಡುತ್ತಿದ್ದಾರೆ. ಕ್ಷಾಮದ ಪರಿಣಾಮದಿಂದ ಹಲವು ದುರ್ಘಟನೆಗಳು ನಡೆಯುತ್ತಿವೆ. ಹಿಂಸಾಚಾರಗಳು ತಾಂಡವವಾಡುತ್ತಿವೆ. ಕಲೆಕ್ಟರ್ ಇದನ್ನು ಆಲಿಸಿ ಪರಿಸ್ಥಿತಿಯನ್ನು ಸುಸ್ಥಿತಿಗೆ ತರಲು ಕಾರ್ಯತತ್ಪರರಾಗಿದ್ದಾರೆ. ಅವರು ಬಿಳಿಯ ಪೊಲೀಸ್ ಅಧಿಕಾರಿಗಳನ್ನು ನಿಯೋಜಿಸಿ, ಪರಿಸ್ಥಿತಿಯನ್ನು ನಿಯಂತ್ರಣಕ್ಕೆ ತರಲು ಪ್ರಯತ್ನಿಸಿದರು. 50ಕ್ಕೂ ಹೆಚ್ಚು ಸತ್ಯಶೋಧಕ ಕಾರ್ಯಕರ್ತರನ್ನು ಬಂಧಿಸಲಾಗಿದೆ. ಕಲೆಕ್ಟರ್ ನನ್ನನ್ನು ಮಾತುಕತೆಗೆ ಆಹ್ವಾನಿಸಿದ್ದರು. ನಮ್ಮ ಸ್ವಯಂ ಸೇವಕರನ್ನು ಸುಳ್ಳು ಆರೋಪದ ಮೇಲೆ ಹಾಗೂ ಯಾವುದೇ ಕಾರಣವಿಲ್ಲದೆ ಬಂಧಿಸಿದ್ದು ಯಾಕೆ ಎಂದು ಕಲೆಕ್ಟರ್‌ರನ್ನು ಪ್ರಶ್ನಿಸಿದೆ. ನಾನು ಇವರನ್ನು ತಕ್ಷಣ ಬಿಡುಗಡೆ ಮಾಡುವಂತೆ ಕೋರಿದೆ. ಸಭ್ಯ, ಯೋಗ್ಯ ಹಾಗೂ ಪಕ್ಷಪಾತವಿಲ್ಲದ ಕಲೆಕ್ಟರ್ ಬಿಳಿಯ ಪೊಲೀಸ್ ಅಧಿಕಾರಿಗಳಿಗೆ ಬೈದರು. ಪಾಟೀಲ ರೈತರು ದರೋಡೆಕೋರರೇ? ಕೂಡಲೇ ಅವರನ್ನು ಬಿಟ್ಟುಬಿಡಿ. ಜನರ ಅವಸ್ಥೆ ಕಲೆಕ್ಟರ್‌ರವರ ಮನಕಲುಕಿತು. ತಕ್ಷಣವೇ ಅವರು ನಾಲ್ಕು ಎತ್ತಿನ ಗಾಡಿಗಳಲ್ಲಿ ಜೋಳವನ್ನು ಆಹಾರವಾಗಿ ಕಳುಹಿಸಿದರು.

ಬಡವರು ಮತ್ತು ನಿರ್ಗತಿಕರಿಗೆ ಪರೋಪಕಾರಿ ಜನಕಲ್ಯಾಣ ಕಾರ್ಯವನ್ನು ನೀವು ಪ್ರಾರಂಭಿಸಿದ್ದೀರಿ. ನಾನು ಸಹಾ ಈ ಜವಾಬ್ದಾರಿಯಲ್ಲಿ ಪಾಲನ್ನು ಹೊರಲು ಬಯಸುತ್ತೇನೆ. ನಾನು ಯಾವಾಗಲೂ ಸಹಾಯ ಮಾಡುತ್ತೇನೆ ಎಂದು ನಿಮಗೆ ಭರವಸೆ ಕೊಡುತ್ತೇನೆ. ಇಂತಹ ಧರ್ಮನಿಷ್ಠ ಕೆಲಸಗಳು ಹೆಚ್ಚು ಜನರಿಗೆ ಸಹಾಯ ಮಾಡಲಿ ಎಂದು ಬಯಸುತ್ತೇನೆ.
ಇನ್ನೇನೂ ಹೆಚ್ಚಿಗೆ ಬರೆಯಲು ಬಯಸುವುದಿಲ್ಲ.

ಇಂತಿ ನಿಮ್ಮವಳು,
ಸಾವಿತ್ರಿ









ಅಂತ್ಯಸಂಸ್ಕಾರ ಮೆರವಣಿಗೆಯಲ್ಲಿ ಯಶ್ವಂತ್ ದಕ್ಷಿಣಾಗ್ನಿ (ಮಣ್ಣಿನ ಮಡಕೆಯಲ್ಲಿ ಅಗ್ನಿ)ಯನ್ನು ತೆಗೆದುಕೊಂಡು ಹೋಗಬೇಕಾಗಿತ್ತು.
ನೀನು ಅವನ ದತ್ತು ಪುತ್ರ. ನೀನು ದಕ್ಷಿಣಾಗ್ನಿಯನ್ನು ತೆಗೆದುಕೊಂಡು ಹೋಗುವಂತಿಲ್ಲ. ನಾನು ಅವರ ರಕ್ತ ಸಂಬಂಧಿ. ನಾನು ಒಯ್ಯುತ್ತೇನೆ.
ಜ್ಯೋತಿರಾವ್ ನವೆಂಬರ್ 28, 1890ರಲ್ಲಿ ನಿಧನರಾದರು.
ಜ್ಯೋತಿರಾವ್ ಮರಣದ ನಂತರ ಸತ್ಯಶೋಧಕ ಸಮಾಜದ ನೇತೃತ್ವವನ್ನು ಸಾವಿತ್ರಿಬಾಯಿ ವಹಿಸಿದರು. 1893ರಲ್ಲಿ ಸಾಸವಾಡದಲ್ಲಿ ನಡೆದ ಸತ್ಯಶೋಧಕ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು.
ನಾನು ಅವರ ಪತ್ನಿ. ನಾನು ದಕ್ಷಿಣಾಗ್ನಿಯನ್ನು ಒಯ್ಯುತ್ತೇನೆ.
ಸಾವಿತ್ರಿಬಾಯಿ ಜ್ಯೋತಿರಾವ್‌ರವರ ಚಿತೆಗೆ ಅಗ್ನಿಸ್ಪರ್ಶ ಮಾಡಿದರು. ಮಹಿಳೆ ಚಿತೆಗೆ ಅಗ್ನಿಸ್ಪರ್ಶ ಮಾಡುವುದು ನಿಷೇಧ ಎಂಬ ಸಾಮಾಜಿಕ ಕಟ್ಟಳೆಯನ್ನು ವಿರೋಧಿಸಿದರು. ಇದರಿಂದ ಅಲ್ಲಿ ನೆರೆದಿದ್ದ ಎಲ್ಲರಿಗೂ ಆಘಾತವಾಯಿತು.






1896ರಲ್ಲಿ ಮಹಾರಾಷ್ಟ್ರದಲ್ಲಿ ಭೀಕರ ಬರಗಾಲ ಇತ್ತು ಹಾಗೂ 1897ರಲ್ಲಿ ಪುಣೆಯನ್ನು ಪ್ಲೇಗ್ ಮಹಾಮಾರಿ ಹಠಾತ್ ಪ್ರವೇಶಿಸಿತು.
ಸಾವಿತ್ರಿಬಾಯಿ ಈ ಎರಡು ವರ್ಷಗಳಲ್ಲಿ ಪರಿಹಾರ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಳು. ಅವಳು ಯಶವಂತನನ್ನು ಸೇನೆಯಿಂದ ರಜೆ ಪಡೆದುಕೊಂಡು ಬಂದು, ಪುಣೆಯಲ್ಲಿ ಪರಿಹಾರ ಕಾರ್ಯದಲ್ಲಿ ಕೈಜೋಡಿಸಲು ಕೋರಿದಳು.


ಪ್ಲೇಗು ಸಂತ್ರಸ್ತರಿಗೆ ಚಿಕಿತ್ಸೆ ನೀಡಲು ಯಶ್ವಂತ್ ಆಸ್ಪತ್ರೆಯನ್ನು ಪ್ರಾರಂಭಿಸಿದರು.




ಮಹಾರ್ ಸಮುದಾಯ ವಾಸಿಸುವ ಪ್ರದೇಶದ ಹೊರಗಡೆ ಮುಂಡ್ವಾದಲ್ಲಿ ಪಾಂಡುರಂಗ ಬಾಬಾಜಿ ಗಾಯಕವಾಡರ ಮಗನಿಗೆ ಪ್ಲೇಗ್ ರೋಗ ಬಂದಿರುವಂತೆ ತೋರುತ್ತದೆ.
ಕೂಡಲೇ ನಾನು ಅವನನ್ನು ಹುಡುಕಿ ಆಸ್ಪತ್ರೆಗೆ ಕರೆದುಕೊಂಡು ಬರುತ್ತೇನೆ.


ಅವಳು ಮಗುವನ್ನು ಆಸ್ಪತ್ರೆಗೆ ಕರೆದುಕೊಂಡು ಬಂದಳು. ಆಗಲೇ ಸಾವಿತ್ರಿಬಾಯಿಗೆ ಪ್ಲೇಗು ರೋಗ ತಗುಲಿತು. ತನ್ನ ಜೀವನವನ್ನು ಇತರರಿಗೆ ಮುಡಿಪಾಗಿಟ್ಟ ಸಾವಿತ್ರಿಬಾಯಿ ತನ್ನ ಕೊನೆಯುಸಿರಿರುವ ತನಕ ಕಾರ್ಯ ಮುಂದುವರಿಸಿದಳು. ಅವಳ ಧೈರ್ಯ ಹಾಗೂ ಸೇವೆ ಪ್ರಾತಃಸ್ಮರಣೀಯ. ಸಾವಿತ್ರಿಬಾಯಿ ಮಾರ್ಚ್ 10, 1897ರಲ್ಲಿ ನಿಧನರಾದರು.

## Bibliography


1. **B. R. Sunthankar, Maharashtra 1858-1920,** Popular Book Depot, 1993, Bombay
2. **Braj Ranjan Mani and Pamela Sardar eds.,** A Forgotten Liberator, Mountain Peak, New Delhi, 2008
3. **Dhananjay Keer,** Mahatma Jotirao Phooley, Popular Prakashan, Bombay, 1964
4. **Donald B. Rosenthal,** `Making It' in Maharashtra, The Journal of Politics, Vol. 36, No. 2 (May, 1974), 409
5. **Dr. T. Sundararaman,** Savitribai Phule First Memorial Lecture, NCERT, 2008
6. **G. Aloysius,** Nationalism Without a Nation, OUP, New Delhi, 1997
7. **G. P. Deshpande ed.,** Selected Writings of Joti rao Phule, New Delhi, Left word, 2002
8. **Gail Omvedt,** Cultural Revolt in a Colonial Society: The Non-Brahman Movement in Western India 1873-1930, Mumbai, Scientific Socialist Education Trust, 1976
9. **J. V. Naik, Ramkrishna Gopal Bhandarkar (1837-1925)** The Man and His Missionin Studies in History of the Deccan Medieval and Modem, M.A. Nayeem et el., eds, Pragati Publications, Delhi 2002
10. **M. G. Mali ed.,** Savitri bai Phule Samagra Wangmaya, Mumbai, Maharashtra Rajya Sahitya aani Sanskriti Mandali, 1998
11. **Nicholas B. Dirks,** Castes of Mind: Colonialism and the Making of Modern India
12. **Parimala V. Rao,** Educating Women And Non-Brahmins As`Loss Of Nationality': Bal-Gangadhar Tilak and the Nationalist Agenda in Maharashtra
13. **Rosalin O'Hanlon,** Caste, Conflict and Ideology: Mahatma Jotirao Phule and Low Caste Protest in Nineteenth Century Western India, Cambridge, Cambridge University Press, 1985
14. **Rosalind O'Hanlon,** Maratha History as Polemic: Low Caste Ideology and Political Debate in Late Nineteenth-Century Western India, Modem Asian Studies, Vol.17, No.1(1983), 1
15. **Susie Tharu and K. Lalita Eds.** Women Writing In India: 600 B.C. to Early 20th Century. (New York: The Feminist Press, 1991)
16. **Tara Chand,** History of the Freedom Movement in India Vol II, Ministry of Information and Broadcasting, New Delhi, 1967




## ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ

ಅಜೀಂ ಪ್ರೇಮ್‌ಜಿ ಫೌಂಡೇಷನ್ ಒಂದು ಲಾಭರಹಿತ ಸಂಸ್ಥೆಯಾಗಿದ್ದು, ಭಾರತದಲ್ಲಿ ಗುಣಾತ್ಮಕ ಶಿಕ್ಷಣ ಮತ್ತು ಸಮಾನತೆಯನ್ನು ಸಾಧಿಸುವ ನಿಟ್ಟಿನಲ್ಲಿ ಆಳವಾದ, ಬೃಹತ್ ಪ್ರಮಾಣದ ಮತ್ತು ಸಾಂಸ್ಥೀಕರಣದ ಮೂಲಕ ದೀರ್ಘಾವಧಿ ಪರಿಣಾಮ ಬೀರಲು ಕಳೆದ ಎರಡು ದಶಕಗಳಿಂದಲೂ ಕಾರ್ಯನಿರ್ವಹಿಸುತ್ತಿದೆ. ಇದಲ್ಲದೆ ಫೌಂಡೇಷನ್ ಶಿಕ್ಷಣ ಕ್ಷೇತ್ರಕ್ಕೆ ಪೂರಕವಾದ ಮಕ್ಕಳ ಆರೋಗ್ಯ, ಪೌಷ್ಟಿಕಾಂಶ, ಆಡಳಿತ ಮತ್ತು ಪರಿಸರ ಮುಂತಾದ ಅಭಿವೃದ್ಧಿ ಕ್ಷೇತ್ರಗಳಲ್ಲಿಯೂ ತೊಡಗಿಸಿಕೊಂಡಿದೆ. ಅಜೀಂ ಪ್ರೇಮ್‌ಜಿ ಫೌಂಡೇಷನ್ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಒಂದು ದಶಕದ ಕಾಲ ಕೆಲಸ ಮಾಡಿದ ಅನುಭವ ಮತ್ತು ಕಲಿಕೆಯ ಆಧಾರದ ಮೇಲೆ ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯು ನೆಲೆಗೊಂಡಿದೆ.

ಭಾರತವು ಶಿಕ್ಷಣ ಮತ್ತು ಅಭಿವೃದ್ಧಿ ಕ್ಷೇತ್ರಗಳಲ್ಲಿ ಸಾಬೀತುಪಡಿಸಿದ ಸಿದ್ಧಾಂತ ಮತ್ತು ಜ್ಞಾನ, ಸಮರ್ಥ ಹಾಗೂ ಪುನರ್ ಅವಲೋಕಿಸುವ ವೃತ್ತಿಪರರ ಕೊರತೆಯನ್ನು ಎದುರಿಸುತ್ತಿದ್ದು, ಈ ಸವಾಲುಗಳನ್ನು ಸಮರ್ಪಕವಾಗಿ ಎದುರಿಸಲು ಫೌಂಡೇಷನ್ ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯನ್ನು ಸ್ಥಾಪಿಸಿದೆ. ಯೂನಿವರ್ಸಿಟಿಯು ಹೊಸ ಪ್ರತಿಭೆಗಳನ್ನು ಅಭಿವೃದ್ಧಿಪಡಿಸುವುದು ಮತ್ತು ಜ್ಞಾನವನ್ನು ಸೃಷ್ಟಿಸುವುದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದೆ. ಈ ಜ್ಞಾನ ಮತ್ತು ಪ್ರತಿಭೆಗಳು ವೇಗವರ್ಧಕವಾಗಿ ಕಾರ್ಯನಿರ್ವಹಿಸುವುದರ ಮೂಲಕ ಶಿಕ್ಷಣ ಮತ್ತು ಅಭಿವೃದ್ಧಿ ಕ್ಷೇತ್ರಗಳಲ್ಲಿ ಸುಸ್ಥಿರ ಬೆಳವಣಿಗೆಯನ್ನು ಸಾಧಿಸುವುದಾಗಿದೆ. ಈ ಯೂನಿವರ್ಸಿಟಿಗೆ ತನ್ನದೇ ಆದ ಸಾಮಾಜಿಕ ಕಳಕಳಿಯಿದ್ದು, ಭಾರತದಲ್ಲಿ ಶಿಕ್ಷಣ ಮತ್ತು ಅಭಿವೃದ್ಧಿ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಏಕೈಕ ಯೂನಿವರ್ಸಿಟಿಯಾಗಿದೆ. ಈ ಮೂಲಕ ನ್ಯಾಯಸಮ್ಮತ, ಸಮಾನ, ಮಾನವೀಯ ಹಾಗೂ ಸುಸ್ಥಿರ ಸಮಾಜ ನಿರ್ಮಾಣಕ್ಕಾಗಿ ಮಹತ್ತರ ಕೊಡುಗೆ ನೀಡುವ ಉದ್ದೇಶವನ್ನು ಹೊಂದಿರುತ್ತದೆ.